# ಕರ್ನಾಟಕ ವಿಧಾನ ಪರಿಷತ್

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 920(1125) |
| ಮಾನ್ಯ ಸದಸ್ಯರ ಹೆಸರು | : | ಶ್ರೀ ಕೆ.ಸಿ. ಕೊಂಡಯ್ಯ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ), |
| ಉತ್ತರಿಸುವ ದಿನಾಂಕ | : | 22.12.2021 |
| ಉತ್ತರಿಸುವ ಸಚಿವರು | : | ಲೋಕೋಪಯೋಗಿ ಸಚಿವರು |

<table>
<tr><th>ಕ್ರ.ಸಂ.</th><th>ಪ್ರಶ್ನೆಗಳು</th><th>ಉತ್ತರ</th></tr>
<tr><td>ಅ)</td><td>ರಾಜ್ಯದ ಲೋಕೋಪಯೋಗಿ ಇಲಾಖೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ವಿವಿಧ ಶ್ರೇಣಿಯ ಹೊರಗುತ್ತಿಗೆ ನೌಕರರ ಸಂಖ್ಯೆ ಎಷ್ಟು: (ವಿಭಾಗವಾರು ವಿವರ ನೀಡುವುದು)</td><td>ಲೋಕೋಪಯೋಗಿ ಇಲಾಖೆ ವ್ಯಾಪ್ತಿಯಲ್ಲಿ ಕಾರ್ಯನಿರ್ವಹಿಸುತ್ತಿರುವ ವಿವಿಧ ಶ್ರೇಣಿಯ ಹೊರಗುತ್ತಿಗೆ ನೌಕರರ ವಿವರ ಕೆಳಕಂಡಂತಿದೆ.
<table>
<tr><th>ಕ್ರ.ಸಂ.</th><th>ಕಚೇರಿಯ ವಿವರ</th><th>ಸಂಖ್ಯೆ</th></tr>
<tr><td>1</td><td>ಲೋಕೋಪಯೋಗಿ ಇಲಾಖೆ, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ ವಲಯ), ಬೆಂಗಳೂರು</td><td>85</td></tr>
<tr><td>2</td><td>ಲೋಕೋಪಯೋಗಿ ಇಲಾಖೆ, ಸಂಪರ್ಕ ಮತ್ತು ಕಟ್ಟಡಗಳು (ಉತ್ತರ ವಲಯ), ಧಾರವಾಡ</td><td>07</td></tr>
<tr><td>3</td><td>ಲೋಕೋಪಯೋಗಿ ಇಲಾಖೆ, ಸಂಪರ್ಕ ಮತ್ತು ಕಟ್ಟಡಗಳು (ಈಶಾನ್ಯ ವಲಯ), ಕಲಬುರಗಿ</td><td>00</td></tr>
<tr><td>4</td><td>ಲೋಕೋಪಯೋಗಿ ಇಲಾಖೆ, ಸಂಪರ್ಕ ಮತ್ತು ಕಟ್ಟಡಗಳು (ಕೇಂದ್ರ ವಲಯ), ಶಿವಮೊಗ್ಗ</td><td>10</td></tr>
<tr><td>5</td><td>ರಾಷ್ಟ್ರೀಯ ಹೆದ್ದಾರಿಗಳು, ಬೆಂಗಳೂರು</td><td>58</td></tr>
<tr><td>6</td><td>ಯೋಜನಾ ಅಭಿವೃದ್ಧಿ ಘಟಕ (ಎಸ್.ಹೆಚ್.ಡಿ.ಪಿ.), ಬೆಂಗಳೂರು</td><td>30</td></tr>
<tr><td>7</td><td>ಕೆಶಿಫ್, ಬೆಂಗಳೂರು</td><td>130</td></tr>
<tr><td>8</td><td>PRAMC, ಬೆಂಗಳೂರು</td><td>08</td></tr>
<tr><td>9</td><td>ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತ, ಬೆಂಗಳೂರು</td><td>89</td></tr>
<tr><td>10</td><td>ಗುಣ ಭರವಸೆ ವಲಯ, ಬೆಂಗಳೂರು</td><td>81</td></tr>
</table></td></tr>
<tr><td>ಆ)</td><td>ಹೊರಗುತ್ತಿಗೆ ನೇಮಿಸಿಕೊಂಡಿರುವ ಆಯಾ ವಿಭಾಗ ಕಚೇರಿಗಳಲ್ಲಿ ಖಾಲಿ ಇರುವ ಬೆರಳಚ್ಚುಗಾರರ (ಡಾಟಾ ಎಂಟ್ರಿ ಅಸಿಸ್ಟೆಂಟ್) ಹುದ್ದೆಗಳ ಸಂಖ್ಯೆ ಎಷ್ಟು: (ವಿಭಾಗವಾರು ವಿವರ ನೀಡುವುದು)</td><td>ಮುಖ್ಯ ಇಂಜಿನಿಯರ್, ರಾಷ್ಟ್ರೀಯ ಹೆದ್ದಾರಿಗಳು, ಬೆಂಗಳೂರು ವ್ಯಾಪ್ತಿಯಲ್ಲಿ 09 ಹಾಗೂ ಮುಖ್ಯ ಇಂಜಿನಿಯರ್, ಗುಣ ಭರವಸೆ ವಲಯ, ಬೆಂಗಳೂರು ವ್ಯಾಪ್ತಿಯಲ್ಲಿ 25 ಬೆರಳಚ್ಚುಗಾರರ/ಡಾಟಾ ಎಂಟ್ರಿ ಅಸಿಸ್ಟೆಂಟ್ ಹುದ್ದೆಗಳನ್ನು ಹೊರತುಪಡಿಸಿ, ಉಳಿದಂತೆ ಲೋಕೋಪಯೋಗಿ ಇಲಾಖೆಯ ಕಚೇರಿಗಳಲ್ಲಿ ಬೆರಳಚ್ಚುಗಾರರ / ಡಾಟಾ ಎಂಟ್ರಿ ಅಸಿಸ್ಟೆಂಟ್ ಹುದ್ದೆಗಳು ಖಾಲಿ ಇರುವುದಿಲ್ಲ.</td></tr>
<tr><td>ಇ)</td><td>ಖಾಲಿ ಹುದ್ದೆಗಳ ಎದುರಾಗಿ ಮಾತ್ರ ಹೊರಗುತ್ತಿಗೆ ನೌಕರರನ್ನು ನೇಮಿಸಿಕೊಳ್ಳಲು ಸರ್ಕಾರದಿಂದ ಆದೇಶ ಹೊರಡಿಸಲಾಗಿದೆಯೇ:</td><td>ಖಾಲಿ ಹುದ್ದೆಗಳ ಎದುರಾಗಿ ಮಾತ್ರ ಹೊರಗುತ್ತಿಗೆ ನೌಕರರನ್ನು ನೇಮಿಸಿಕೊಳ್ಳಲು ಸರ್ಕಾರದಿಂದ ಆದೇಶ ಸಂಖ್ಯೆ: ಆಇ 6 ಟಿ.ಎಫ್.ಪಿ. 2018, ದಿನಾಂಕ: 22.03.2019 ನ್ನು ಹೊರಡಿಸಲಾಗಿದೆ.</td></tr>
</table>

| | | |
|---|---|---|
| ಈ) | ಹಾಗಿದ್ದರೂ ಹೆಚ್ಚುವರಿಯಾಗಿ ಹೊರಗುತ್ತಿಗೆ ನೌಕರರನ್ನು (ಡಾಟಾ ಎಂಟ್ರಿ ಅಸಿಸ್ಟೆಂಟ್) ನೇಮಿಸಿಕೊಳ್ಳುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: | ಖಾಲಿ ಹುದ್ದೆಗಳಿಗೆ ಎದುರಾಗಿ ಮಾತ್ರ ನೌಕರರನ್ನು ಹೊರಗುತ್ತಿಗೆ ಆಧಾರದಲ್ಲಿ ನೇಮಕ ಮಾಡಿಕೊಂಡಿದ್ದು, ಹೆಚ್ಚುವರಿಯಾಗಿ ನೇಮಿಸಿಕೊಂಡಿರುವುದಿಲ್ಲ. |
| ಉ) | ಈಗಾಗಲೇ ಕಡ್ಡಾಯವಾಗಿ ಎಲ್ಲಾ ಸರ್ಕಾರಿ ನೌಕರರು ಕಂಪ್ಯೂಟರ್ ತರಬೇತಿಯನ್ನು ಪಡೆದಿದ್ದು ಕಂಪ್ಯೂಟರ್‌ನಲ್ಲಿ ಕಾರ್ಯ ನಿರ್ವಹಿಸಬೇಕಾಗಿರುವುದರಿಂದ ಹೆಚ್ಚುವರಿಯಾಗಿ ಹೊರಗುತ್ತಿಗೆ ನೌಕರರನ್ನು (ಡಾಟಾ ಎಂಟ್ರಿ ಅಸಿಸ್ಟೆಂಟ್) ನೇಮಿಸಿಕೊಳ್ಳುತ್ತಿರುವುದರಿಂದ, ಸರ್ಕಾರದ ಬೊಕ್ಕಸಕ್ಕೆ ಹೊರೆಯಾಗುವುದಿಲ್ಲವೇ: | ಪ್ರಶ್ನೆ ಉದ್ಭವಿಸುವುದಿಲ್ಲ. |
| ಊ) | ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ) ಕಛೇರಿಯ ವ್ಯಾಪ್ತಿಯಲ್ಲಿ ಕಾರ್ಯನಿರ್ವಹಿಸುತ್ತಿರುವ ಹೊರಗುತ್ತಿಗೆ ನೌಕರರಿಗೆ ನಾಲ್ಕು ತಿಂಗಳಿಂದ ವೇತನ ಬಾಕಿ ಇರುವುದು ಅಥವಾ ಮಾಹೆಯಾನ ಸರಿಯಾಗಿ ವೇತನ ನೀಡುತ್ತಿಲ್ಲದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: | ಹೊರಗುತ್ತಿಗೆ ನೌಕರರ ಸೇವೆಯನ್ನು ಖಾಸಗಿ ಏಜೆನ್ಸಿಗಳಿಂದ ಗುತ್ತಿಗೆ ಮೂಲಕ ಪಡೆಯುತ್ತಿದ್ದು, ಹೊರಗುತ್ತಿಗೆ ನೌಕರರಿಗೆ ಏಜೆನ್ಸಿಯವರ ಮೂಲಕ ವೇತನ ಪಾವತಿ ಮಾಡಲಾಗಿರುತ್ತದೆ. |
| ಋ) | ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ) ಕಛೇರಿಯಲ್ಲಿ ಕೆಲವೊಂದು ನೌಕರರು ಖಾಸಗಿಯಾಗಿ ಡಾಟಾ ಎಂಟ್ರಿ ಅಸಿಸ್ಟೆಂಟ್ ರವರನ್ನು ನೇಮಿಸಿಕೊಂಡು ಅವರೇ ಸ್ವತಃ ವೇತನ ಪಾವತಿ ಮಾಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: | ಮುಖ್ಯ ಇಂಜಿನಿಯರ್(ದ) ಕಛೇರಿಯಲ್ಲಿ ಖಾಸಗಿಯಾಗಿ ಡಾಟಾ ಎಂಟ್ರಿ ಅಸಿಸ್ಟೆಂಟ್ ರವರನ್ನು ನೇಮಿಸಿಕೊಂಡಿರುವುದಿಲ್ಲ ಹಾಗೂ ಸ್ವತಃ ವೇತನ ಪಾವತಿ ಮಾಡುತ್ತಿರುವ ಪ್ರಕರಣಗಳು ಯಾವುದು ಇರುವುದಿಲ್ಲ. |
| ೠ) | ಹೊರಗುತ್ತಿಗೆ ಆಧಾರದ ಮೇಲೆ ನೇಮಿಸಿಕೊಂಡ ನೌಕರರಿಗೆ ಮಾಹೆಯಾನ ನಿಯಮಿತವಾಗಿ ವೇತನ ಪಾವತಿ ಮಾಡಲು ಕ್ರಮ ಕೈಗೊಳ್ಳಲಾಗುವುದೇ? | ಸರ್ಕಾರದಿಂದ ಕಾಲ ಕಾಲಕ್ಕೆ ಹಣ ಬಿಡುಗಡೆ ಮಾಡುವುದರಿಂದ ಸದರಿ ಹೊರಗುತ್ತಿಗೆ ನೌಕರರಿಗೆ ಮಾಹೆಯಾನ ನಿಯಮಿತವಾಗಿ ವೇತನ ಪಾವತಿ ಮಾಡಲು ಕ್ರಮ ಕೈಗೊಳ್ಳಲಾಗುತ್ತಿದೆ. |

ಸಂಖ್ಯೆ: ಲೋಇ 31 ಸೇಇಸಿ 2021

(ಸಿ.ಸಿ. ಪಾಟೀಲ)
ಲೋಕೋಪಯೋಗಿ ಸಚಿವರು